## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪಶ್ನೆ ಸಂಖ್ಯೆ : 1724

ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಆರ್.ಬಿ.ತಿಮ್ಮಾಪೂರ (ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 22.03.2021

ಉತ್ತರಿಸಬೇಕಾದವರು : ಮಾನ್ಯ ಪ್ರವಾಸೋದ್ಯಮ ಹಾಗೂ ಪರಿಸರ ಮತ್ತು ಜೀವಿಪರಿಸ್ಥಿತಿ ಸಚಿವರು.

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದ ಸಕ್ಕರೆ ಕಾರ್ಖಾನೆಗಳಿಂದ ಹೊರಸೂಸುವ ಮಾಲಿನ್ಯದಿಂದ ಪರಿಸರದ ಮೇಲೆ ಆಗುತ್ತಿರುವ ದುಷ್ಪರಿಣಾಮಗಳಾವುವು ? | • ಸಕ್ಕರೆ ಕಾರ್ಖಾನೆಗಳಿಂದ ಉತ್ಪತ್ತಿಯಾಗುವ ಕಲ್ಮಷ ತ್ಯಾಜ್ಯ ನೀರನ್ನು ಸಂಸ್ಕರಣ ಘಟಕ ಆಳವಡಿಸಿ ನಿಗಧಿತ ಮಾನಕಗಳಿಗೆ ಸಂಸ್ಕರಿಸದೆ ವಿಲೇವಾರಿ ಮಾಡಿದಲ್ಲಿ ಜಲ ಮೂಲ / ಅಂತರ್ಜಲ ಕಲುಷಿತಗೊಳ್ಳುವ ಸಾಧ್ಯತೆಗಳಿರುತ್ತವೆ.<br>• ಸಕ್ಕರೆ ಕಾರ್ಖಾನೆಗಳಿಂದ ಹೊರಹೊಮ್ಮವ Stack / Fugitive emission ಗೆ ಸೂಕ್ತ ವಾಯು ಮಾಲಿನ್ಯ ನಿಯಂತ್ರಣ ಕ್ರಮಗಳನ್ನು ಅಳವಡಿಸದೆ ಇದ್ದಲ್ಲಿ ಮಾನವ ಆರೋಗ್ಯದ ಮೇಲೆ ದುಷ್ಪರಿಣಾಮ ಹಾಗೂ ಬೆಳೆನಾಶವಾಗುವ ಸಾಧ್ಯತೆಗಳಿರುತ್ತವೆ<br>• ಸಕ್ಕರೆ ಕಾರ್ಖಾನೆಗಳಿಂದ ಉತ್ಪತ್ತಿಯಾಗುವ ಘನ ತ್ಯಾಜ್ಯ ವಸ್ತುಗಳಾದ ಹಾರು ಬೂದಿ, ಮೊಲಾಸಿಸ್ (ಕಾಕಂಬಿ), ಕಬ್ಬಿನ ಸಿಪ್ಪೆ (ಬಾಗಾಸ್ಸೇ), ಒತ್ತು ಮಡ್ಡಿ (ಪ್ರೆಸ್‌ಮಡ್) ಮುಂತಾದವುಗಳನ್ನು ಸೂಕ್ತ ರೀತಿಯಲ್ಲಿ ಸಂಗ್ರಹಿಸಿ ವೈಜ್ಞಾನಿಕ ರೀತಿಯಲ್ಲಿ ವಿಲೇವಾರಿ ಮಾಡದಿದ್ದಲ್ಲಿ ಜಲ ಮೂಲ / ಅಂತರ್ಜಲ / ಮಣ್ಣು ಕಲುಷಿತಗೊಳ್ಳುವ ಸಾಧ್ಯತೆಗಳಿರುತ್ತವೆ. |
| (ಆ) | ಮಾಲಿನ್ಯ ನಿವಾರಣೆಗಾಗಿ ಸರ್ಕಾರ ಕಟ್ಟುನಿಟ್ಟಿನ ಆದೇಶಗಳನ್ನು ಹೊರಡಿಸಿದೆಯೇ; ಇದ್ದಲ್ಲಿ ಎಷ್ಟರಮಟ್ಟಿಗೆ ಅದರ ಅನುಷ್ಠಾನವಾಗಿದೆ ? | ಹೌದು,<br>ಸರ್ಕಾರದಿಂದ ಸಕ್ಕರೆ ಕಾರ್ಖಾನೆಗಳಿಗೆ ಈ ಕೆಳಕಂಡ ಕಟ್ಟುನಿಟ್ಟಿನ ಆದೇಶಗಳನ್ನು ಹೊರಡಿಸಲಾಗಿದೆ.<br>• ಕಾರ್ಖಾನೆಯ ಬ್ಲಾಯರ್ ಘಟಕ, ಉತ್ಪಾದನಾ ಘಟಕ, ಕೂಲಿಂಗ್ ಟವರ್ ಮುಂತಾದವುಗಳಲ್ಲಿ ಉತ್ಪತ್ತಿಯಾಗುವ ಕಲ್ಮಷ ತ್ಯಾಜ್ಯ ನೀರನ್ನು ಸಂಸ್ಕರಿಸಲು ಶುದ್ದೀಕರಣ ಘಟಕವನ್ನು ಅಳವಡಿಸಿಕೊಂಡು ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯು ನಿಗದಿಪಡಿಸಿರುವ ಮಾನಕಗಳಿಗೆ ಶುದ್ದೀಕರಿಸಿ ಪುನರ್ ಬಳಕೆ/ವ್ಯವಸಾಯಕ್ಕೆ ಉಪಯೋಗಿಸುವುದು.<br>• ಕಾರ್ಖಾನೆಯ ಬಾಯ್ಲರ್‌ನಿಂದ ಹೊರಹೊಮ್ಮುವ |

| | | | |
|---|---|---|---|
| | | | ಹೊಗೆಗೆ ನಿಗದಿಪಡಿಸಿರುವ ಮಾನಕಗಳ ಅನುಗುಣವಾಗಿ ಸೂಕ್ತ ವಾಯು ಮಾಲಿನ್ಯ ನಿಯಂತ್ರಣ ಕ್ರಮಗಳನ್ನು ಅಳವಡಿಸಿಕೊಳ್ಳುವುದು.<br>• ಘನತ್ಯಾಜ್ಯ ವಸ್ತುಗಳಾದ ಕಬ್ಬಿನ ಸಿಪ್ಪೆಯನ್ನು ಸೂಕ್ತ ರೀತಿಯಲ್ಲಿ ಸಂಗ್ರಹಿಸಿ ಬಾಯ್ಲರ್‌ಗೆ ಉರುವಲಾಗಿ ಬಳಸುವುದು, ಮೊಲಾಸಿಸ್ ಅನ್ನು ಎಂ.ಎಸ್ ಟ್ಯಾಂಕ್‌ಗಳಲ್ಲಿ ಸಂಗ್ರಹಿಸಿ ಮಧ್ಯಸಾರ ಘಟಕ/ ಫೀಡ್ಸ್ ಘಟಕಗಳಿಗೆ ವಿಲೇವಾರಿ ಮಾಡುವುದು, ಒತ್ತು ಮಡ್ಡಿ ಮತ್ತು ಹಾರು ಬೂದಿಯನ್ನು ಮಿಶ್ರಣ ಮಾಡಿ ರೈತರ ವ್ಯವಸಾಯ ಭೂಮಿಗೆ ನೀಡುವುದು.<br>• ಸಕ್ಕರೆ ಕಾರ್ಖಾನೆಗಳು Seasonal ಉದ್ದಿಮೆಗಳಾಗಿದ್ದು ಕಬ್ಬು ಅರೆಯುವ ಅವಧಿಯಲ್ಲಿ ಪ್ರತಿ ಮಾಹೆ ಸಂಸ್ಕರಿಸಿದ ಕಲ್ಮಷ ತ್ಯಾಜ್ಯ ನೀರು, ಚಿಮಿಣಿಯಿಂದ ಹೊರಹೋಗುವ ಮತ್ತು ಪರಿವೇಷ್ಠಕ ವಾಯು ಹಾಗೂ ಸುತ್ತಮುತ್ತಲಿನ ಜಲ ಮೂಲ / ಕೊಳವೆ ಬಾವಿಗಳ ನೀರಿನ ಮಾದರಿಗಳನ್ನು ಸಂಗ್ರಹಿಸಿ ವಿಶ್ಲೇಷಣ ವರದಿಯನ್ನು ಸಲ್ಲಿಸುವುದು.<br>• ಸಂಸ್ಕರಣ ಘಟಕದಲ್ಲಿ ಶುದ್ದೀಕರಿಸಿದ ನೀರಿಗೆ ಮತ್ತು ಬಾಯ್ಲರ್ ಚಿಮಿಣಿಗೆ continuous online monitoring system ಅಳವಡಿಸಿ ಸಿ.ಪಿ.ಸಿ.ಬಿ ಮತ್ತು ಕೆ.ಎಸ್.ಪಿ.ಸಿ.ಬಿ ವೆಬ್ ಸೈಟ್‌ಗಳಿಗೆ ಸಂಪರ್ಕ ಕಲ್ಪಿಸುವುದು.<br>• ಸಿ.ಪಿ.ಸಿ.ಬಿ ಮಾರ್ಗಸೂಚಿಗಳನ್ವಯ ಸಂಸ್ಕರಿಸಿದ ನೀರನ್ನು ವ್ಯವಸಾಯಕ್ಕೆ ಉಪಯೋಗಿಸುವ ಬಗ್ಗೆ ಅನುಪಾಲನಾ ವರದಿಯನ್ನು ಸಲ್ಲಿಸುವುದು.<br>• ಸಿ.ಆರ್.ಇ.ಪಿ ನಿಯಮದಂತೆ ಒಂದು ಟನ್ ಕಬ್ಬು ಅರಿಯುವುದಕ್ಕೆ 100 ಲೀಟರ್ ನೀರನ್ನು ಉಪಯೋಗವನ್ನು ಕಡ್ಡಾಯಗೊಳಿಸುವುದು.<br>• ಈ ಮೇಲ್ಕಂಡ ಷರತ್ತುಗಳನ್ವಯ ಮಾಲಿನ್ಯ ನಿಯಂತ್ರಣ ವ್ಯವಸ್ಥೆಗಳನ್ನು ಅಳವಡಿಸಿಕೊಂಡು ಕಾರ್ಖಾನೆಗಳು ಕಾರ್ಯ ನಿರ್ವಹಿಸಬೇಕಾಗಿರುತ್ತದೆ. ಪಾಲಿಸದಿದ್ದಲ್ಲಿ ಜಲ ಮತ್ತು ವಾಯು ಕಾಯ್ದೆಗಳ ಅಡಿಯಲ್ಲಿ ಸೂಕ್ತ ರೀತಿಯ ಕಾನೂನು ಕ್ರಮ ಜರುಗಿಸಲಾಗುತ್ತದೆ.<br>• 2019–20ನೇ ಸಾಲಿನ ಅವಧಿಯಲ್ಲಿ 15 ಸಕ್ಕರೆ ಕಾರ್ಖಾನೆಗಳು ಹಾಗೂ 2020–21ನೇ ಸಾಲಿನ ಅವಧಿಯಲ್ಲಿ 10 ಸಕ್ಕರೆ ಕಾರ್ಖಾನೆಗಳು ಜಲ ಮತ್ತು ವಾಯು ಕಾಯಿದೆ ಅಡಿಯಲ್ಲಿ ನೀಡಿರುವ ಸಮ್ಮತಿ ಪತ್ರದ ಷರತ್ತುಗಳನ್ನು ಉಲ್ಲಂಘಿಸಿರುವುದು ಗಮನಿಸಿ ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯು ಮೇಲೆ |

| | | |
|---|---|---|
| | | ತಿಳಿಸಿರುವ ವಾರ್ಷಿಕ ಸಾಲಿನ ಅವಧಿಯಲ್ಲಿ ಸಮ್ಮತಿ ಪತ್ರದ ಷರತ್ತುಗಳನ್ನು ಉಲ್ಲಂಘಿಸಿರುವ ಸಕ್ಕರೆ ಕಾರ್ಖಾನೆಗಳಿಗೆ ಕಾರಣ ಕೇಳುವ ನೋಟೀಸ್ ಅನ್ನು ಜಾರಿ ಮಾಡಿ ತದನಂತರ ಮೌಖಿಕ ವಿಚಾರಣೆಯನ್ನು ನಡೆಸಿ ಸೂಕ್ತ ನಿಯಂತ್ರಣ ವ್ಯವಸ್ಥೆಯನ್ನು ಅಳವಡಿಸಿಕೊಂಡು ಕಾರ್ಯಚರಣೆ ನಡೆಸಲು ನಿರ್ದೇಶನಗಳನ್ನು ನೀಡಲಾಗಿರುತ್ತದೆ ಹಾಗೂ ಮಂಡಳಿಯು ನೀಡಿರುವಂತಹ ಮೌಖಿಕ ಆದೇಶದ ನಿರ್ದೇಶನಗಳನ್ನು ಅನುಪಾಲನೆಗಳನ್ನು ಮಾಡುತ್ತಿರುವ ಬಗ್ಗೆ ಸಂಬಂಧಪಟ್ಟಂತಹ ಪ್ರಾದೇಶಿಕ ಅಧಿಕಾರಿಗಳು ಪರಿವೀಕ್ಷಣೆ ನಡೆಸಿ ಅನುಪಾಲನೆಯನ್ನು ಗಮನಿಸಲಾಗುತ್ತದೆ. |

**ಸಂಖ್ಯೆ:ಅಪಜೀ 18 ಇಎನ್‌ಜಿ 2021**

(ಸಿ.ಪಿ.ಯೋಗೇಶ್ವರ)
ಪ್ರವಾಸೋದ್ಯಮ ಹಾಗೂ ಪರಿಸರ ಮತ್ತು
ಜೀವಿಪರಿಸ್ಥಿತಿ ಸಚಿವರು